## ಕರ್ನಾಟಕ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2017 |
| ಮಾನ್ಯ ಸದಸ್ಯರ ಹೆಸರು | ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 24.03.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಡಿ ಕಾರ್ಯನಿರ್ವಹಿಸುತ್ತಿರುವ ಮೆಟ್ರಿಕ್-ಪೂರ್ವ ಹಾಗೂ ಮೆಟ್ರಿಕ್-ನಂತರದ ಹಾಸ್ಟೆಲ್-ಗಳ ಸಂಖ್ಯೆ ಎಷ್ಟು; ಅವು ಯಾವುವು; (ಜಿಲ್ಲಾ ಮತ್ತು ತಾಲ್ಲೂಕುವಾರು ವಿವರ ನೀಡುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ರಾಜ್ಯದಲ್ಲಿ 1301 ಮೆಟ್ರಿಕ್-ಪೂರ್ವ ಮತ್ತು 1137 ಮೆಟ್ರಿಕ್-ನಂತರದ ಹೀಗೆ ಒಟ್ಟು 2438 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು ವಿವರ ಕೆಳಕಂಡಂತಿದೆ.<br><br>(see table below)<br><br>ಜಿಲ್ಲಾವಾರು ಮತ್ತು ತಾಲ್ಲೂಕುವಾರು ವಿದ್ಯಾರ್ಥಿ ನಿಲಯಗಳ ವಿವರವನ್ನು https://bcwd.karnataka.gov.in/ ರಲ್ಲಿ ನೀಡಲಾಗಿದೆ. |
| ಆ) | ಈ ಹಾಸ್ಟೆಲ್-ಗಳನ್ನು 2019-20 ಹಾಗೂ 2020-21ನೇ ಸಾಲಿನಲ್ಲಿ ಯಾವಾಗ ಪ್ರಾರಂಭಿಸಲಾಯಿತು; ಅದರಲ್ಲಿ ವಾಸ್ತವ್ಯವಿರುವ ಮಕ್ಕಳ ಸಂಖ್ಯೆ ಎಷ್ಟು; ಇವರಿಗೆ ನೀಡಿರುವ ಮೂಲಭೂತ ಸೌಕರ್ಯ ಏನು; (ವಾಸ್ತವ್ಯವಿರುವ ವಿದ್ಯಾರ್ಥಿಗಳ ಖರ್ಚು ವೆಚ್ಚದ ಸಂಪೂರ್ಣ ವಿವರ ನೀಡುವುದು) | 2019-20ನೇ ಸಾಲಿನ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲಾಗಿದ್ದು, ಮೆಟ್ರಿಕ್-ಪೂರ್ವ ವಿದ್ಯಾರ್ಥಿನಿಲಯಗಳಲ್ಲಿ 64079 ವಿದ್ಯಾರ್ಥಿಗಳಿಗೆ ಮತ್ತು ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ 99725 ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಕಲ್ಪಿಸಲಾಗಿರುತ್ತದೆ.<br><br>ಕೋವಿಡ್-19ರ ಹಿನ್ನೆಲೆಯಲ್ಲಿ 2020-21ನೇ ಸಾಲಿನಲ್ಲಿ ವಿದ್ಯಾರ್ಥಿನಿಲಯಗಳನ್ನು ನವೆಂಬರ್-2020ರ ಮಾಹೆಯಿಂದ ಹಂತ ಹಂತವಾಗಿ ಪ್ರಾರಂಭಿಸಲಾಗಿದ್ದು, ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ನವೀಕರಣ ಮತ್ತು ಹೊಸ ವಿದ್ಯಾರ್ಥಿಗಳು ಸೇರಿ 98062 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವನ್ನು ಕಲ್ಪಿಸಲಾಗಿದ್ದು, ಮೆಟ್ರಿಕ್-ಪೂರ್ವ (6 ರಿಂದ 10ನೇ ತರಗತಿವರೆಗೆ) ವಿದ್ಯಾರ್ಥಿನಿಲಯಗಳಿಗೆ ಪ್ರವೇಶ ಪ್ರಕ್ರಿಯೆಯು ಚಾಲ್ತಿಯಲ್ಲಿದ್ದು, 40690 ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಕಲ್ಪಿಸಲಾಗಿರುತ್ತದೆ.<br><br>ವಿದ್ಯಾರ್ಥಿನಿಲಯಗಳಲ್ಲಿ ವಾಸ್ತವ್ಯವಿರುವ ವಿದ್ಯಾರ್ಥಿಗಳಿಗೆ ಒದಗಿಸಲಾಗಿರುವ ಮೂಲಭೂತ ಸೌಕರ್ಯಗಳು ಹಾಗೂ ಖರ್ಚು ವೆಚ್ಚದ ವಿವರಗಳನ್ನು https://bcwd.karnataka.gov.in/ ರಲ್ಲಿ ನೀಡಲಾಗಿದೆ. |

| ಕ್ರ. ಸಂ. | ವಿವರ | ವಿದ್ಯಾರ್ಥಿನಿಲಯಗಳ ವಿವರ | | |
|---|---|---|---|---|
| | | ಬಾಲಕರು | ಬಾಲಕಿಯರು | ಒಟ್ಟು |
| 1 | ಮೆಟ್ರಿಕ್-ಪೂರ್ವ ವಿದ್ಯಾರ್ಥಿನಿಲಯಗಳು | 1010 | 291 | 1301 |
| 2 | ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳು | 509 | 628 | 1137 |
| | **ಒಟ್ಟು** | **1519** | **919** | **2438** |

| | | |
|---|---|---|
| ಇ) | 2020-21ನೇ ಸಾಲಿನಲ್ಲಿ ಎಷ್ಟು ವಿದ್ಯಾರ್ಥಿಗಳು ಹಾಸ್ಟೆಲ್-ನಲ್ಲಿ ಪ್ರವೇಶಾತಿ ಪಡೆದಿರುತ್ತಾರೆ; ಹಾಸ್ಟೆಲ್-ಗಳು ಪ್ರಾರಂಭಿಸಲು ಇರುವ ನಿಯಮಾವಳಿಗಳೇನು; ಸಂಬಂಧಿಸಿದ ವಿದ್ಯಾರ್ಥಿಗಳಿಗೆ ಯಾವ ದಿನಾಂಕದಿಂದ ಮೂಲಭೂತ ಸೌಲಭ್ಯ ಒದಗಿಸಿರುತ್ತೀರಿ; | ಕೋವಿಡ್-19ರ ಹಿನ್ನಲೆಯಲ್ಲಿ 2020-21ನೇ ಸಾಲಿನಲ್ಲಿ ವಿದ್ಯಾರ್ಥಿನಿಲಯಗಳನ್ನು ನವೆಂಬರ್-2020ರ ಮಾಹೆಯಿಂದ ಹಂತ ಹಂತವಾಗಿ ಪ್ರಾರಂಭಿಸಲಾಗಿದ್ದು, ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳಲ್ಲಿ ನವೀಕರಣ ಮತ್ತು ಹೊಸ ವಿದ್ಯಾರ್ಥಿಗಳು ಸೇರಿ 98062 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವನ್ನು ಕಲ್ಪಿಸಲಾಗಿದ್ದು, ಮೆಟ್ರಿಕ್-ಪೂರ್ವ (6 ರಿಂದ 10ನೇ ತರಗತಿವರೆಗೆ) ವಿದ್ಯಾರ್ಥಿನಿಲಯಗಳಿಗೆ ಪ್ರವೇಶ ಪ್ರಕ್ರಿಯೆಯು ಚಾಲ್ತಿಯಲ್ಲಿದ್ದು, 40690 ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಕಲ್ಪಿಸಲಾಗಿರುತ್ತದೆ.<br><br>ಈ ವಿದ್ಯಾರ್ಥಿನಿಲಯಗಳನ್ನು ಕೋವಿಡ್-19ರ ಹಿನ್ನಲೆಯಲ್ಲಿ ಸರ್ಕಾರದಿಂದ ನೀಡಲಾಗಿರುವ SOP (ಪ್ರಮಾಣಿಕ ಕಾರ್ಯಾಚರಣಾ ವಿಧಾನ) ಮಾರ್ಗಸೂಚಿಗಳಿಗನುಸಾರವಾಗಿ ಪ್ರಾರಂಭಿಸಲಾಗಿರುತ್ತದೆ.<br><br>ಈ ವಿದ್ಯಾರ್ಥಿನಿಲಯಗಳಲ್ಲಿನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯ ಪ್ರಾರಂಭವಾದ ದಿನಾಂಕದಿಂದಲೇ ಊಟ, ವಸತಿ ಜೊತೆಗೆ ಇತರೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. |
| ಈ) | ಇಲ್ಲಿಯವರೆಗೆ ಬಂದಿರುವ ಅನುದಾನ ಮತ್ತು ಯಾವ ಯಾವ ಸೌಕರ್ಯಗಳಿಗೆ ಎಷ್ಟು ಮೊತ್ತವನ್ನು ಖರ್ಚು ಮಾಡಲಾಗಿದೆ; (ತಿಂಗಳವಾರು, ವರ್ಷವಾರು ಯಾವ ಯಾವ ಲೆಕ್ಕಶೀರ್ಷಿಕೆಯಲ್ಲಿ ಅನುದಾನ ಖರ್ಚು ಮಾಡಿರುವ ಸವಿಸ್ತಾರ ವರದಿ ನೀಡುವುದು) | ಈ ವಿದ್ಯಾರ್ಥಿನಿಲಯಗಳಿಗೆ ಬಿಡುಗಡೆಯಾಗಿರುವ ಹಾಗೂ ಕಲ್ಪಿಸಲಾಗಿರುವ ಸೌಕರ್ಯಗಳಿಗೆ ಖರ್ಚು ಮಾಡಿರುವ ಅನುದಾನದ ತಿಂಗಳವಾರು, ವರ್ಷವಾರು ಮತ್ತು ಲೆಕ್ಕಶೀರ್ಷಿಕೆವಾರು ವಿವರವನ್ನು https://bcwd.karnataka.gov.in/ ರಲ್ಲಿ ನೀಡಲಾಗಿದೆ. |

ಸಂಖ್ಯೆ:ಹಿಂವಕ 245 ಬಿಂಎಂಎಸ್ 2021

(ಕೋಟ ಶ್ರೀನಿವಾಸ ಪೂಜಾರಿ)
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ